ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

21. ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಮೈಸೂರು ಕಾಗದ ಕಾರ್ಖಾನೆಯ ಬಗ್ಗೆ

ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

603 (622) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಮೈಸೂರು ಕಾಗದ ಕಾರ್ಖಾನೆಯನ್ನು ಮತ್ತೆ ಪ್ರಾರಂಭಿಸುವ ಬಗ್ಗೆ ಸರ್ಕಾರ ಯೋಚಿಸಿದೆಯೇ ಅಥವಾ ಈ ಕಾರ್ಖಾನೆಯನ್ನು ಪ್ರಾರಂಭ ಮಾಡದಿದ್ದಲ್ಲಿ ಖಾಸಗಿಯವರಿಗೆ ಗುತ್ತಿಗೆ ನೀಡುವ ಬಗ್ಗೆ ಅಥವಾ ಮಾರಾಟ ಮಾಡುವ ಬಗ್ಗೆ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ;

(ಆ) ಈ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಎಷ್ಟು ನೌಕರರು ವಿಆರ್ಎಸ್ ಪಡೆದಿದ್ದಾರೆ ; ವಿಆರ್ಎಸ್ ಪಡೆಯದೆ ಇರುವ ನೌಕರರ ಸಂಖ್ಯೆ ಎಷ್ಟು ; ಇವರುಗಳನ್ನು ಬೇರೆ ಇಲಾಖೆಗೆ ನಿಯೋಜನೆ ಮಾಡುವ ಉದ್ದೇಶವಿದೆಯೇ ;

(ಇ) ಉದ್ದೇಶವಿದ್ದಲ್ಲಿ, ಸದರಿ ಕಾರ್ಮಿಕರನ್ನು ಯಾವ ಕಾಲಮಿತಿಯೊಳಗೆ ನಿಯೋಜನೆ ಮೇಲೆ ಕಳುಹಿಸಲಾಗುವುದು ; ಈ ನಿಯೋಜನೆಯಿಂದ ತಾಂತ್ರಿಕವಾಗಿ ತೊಂದರೆಗಳೇನಾದರೂ ಉದ್ಭವಿಸುತ್ತಿದೆಯೇ ? (ಸಂಪೂರ್ಣ ವರದಿ ನೀಡುವುದು)